ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಕೊಡಗು ಜಿಲ್ಲೆಯಲ್ಲಿ ಹಾಳಾಗಿರುವ ಗ್ರಾಮೀಣ ಭಾಗದ ರಸ್ತೆ, ಸೇತುವೆ ಮತ್ತು ತಡೆಗೋಡೆಗಳ ದುರಸ್ತಿ ಕುರಿತು

ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು) :-

707 (689) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕೊಡಗು ಜಿಲ್ಲೆಯಲ್ಲಿ ಕಳೆದ 3 ವರ್ಷಗಳಲ್ಲಿ ಸುರಿದ ಧಾರಕಾರ ಮಳೆ ಹಾಗೂ ಭೂಕುಸಿತದಿಂದಾಗಿ, ಗ್ರಾಮೀಣ ಭಾಗದ ಹಲವಾರು ರಸ್ತೆ, ಸೇತುವೆ ಮತ್ತು ತಡೆಗೋಡೆಗಳು ಹಾನಿಗೀಡಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಬಂದಿದ್ದಲ್ಲಿ, ಕಳೆದ 3 ವರ್ಷಗಳಲ್ಲಿ ಹಾನಿಗೀಡಾದ ರಸ್ತೆ, ಸೇತುವೆ ಹಾಗೂ ತಡೆಗೋಡೆಗಳು ಯಾವುವು ; ಅವುಗಳ ದುರಸ್ಥಿ ಅಥವಾ ಮರು ನಿರ್ಮಾಣ ಮಾಡಲಾಗಿದೆಯೇ ; (ವರ್ಷವಾರು ಹಾಗೂ ಕಾಮಗಾರಿವಾರು ಮಾಹಿತಿ ನೀಡುವುದು)

(ಇ) ಕಳೆದ 3 ವರ್ಷಗಳಲ್ಲಿ ಈ ರೀತಿ ಹಾನಿಗೀಡಾದ ರಸ್ತೆ, ಸೇತುವೆ ಮತ್ತು ತಡೆಗೋಡೆಗಳ ದುರಸ್ಥಿ ಅಥವಾ ಮರು ನಿರ್ಮಾಣಕ್ಕೆ ವಿನಿಯೋಗಿಸಿರುವ ಅನುದಾನವೆಷ್ಟು ; (ವರ್ಷವಾರು ಹಾಗೂ ಕಾಮಗಾರಿವಾರು ವಿವರಗಳನ್ನು ನೀಡುವುದು)

(ಈ) ಇದುವರೆಗೂ ದುರಸ್ಥಿ ಅಥವಾ ಮರು ನಿರ್ಮಾಣವಾಗದಿರುವ ರಸ್ತೆ ಸೇತುವೆ ಹಾಗೂ ತಡೆಗೋಡೆಗಳು ಯಾವುವು ; ಮತ್ತು ಇದಕ್ಕೆ ಕಾರಣಗಳೇನು ?